# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

MUNJAVU' 'Kannada Weekly, KOPPA-CHM. ಫೋನ್ : 114

8ನೇ ವರ್ಷ 17ನೇ ಸಂಚಿಕೆ ಕೊಪ್ಪ 17-12-1989 ಭಾನುವಾರ ಬೆಲೆ 60 ಪೈಸೆ



## 'ನೈಸರ್ಗಿಕ ಕೃಷಿ' ವಿಚಾರ ವಿನಿಮಯ

**ಕೊಪ್ಪ: ಇಲ್ಲಿನ ಕೃಷಿ ವಿಚಾರ ವಿನಿಮಯ ಕೇಂದ್ರದ ವತಿಯಿಂದ 'ನೈಸರ್ಗಿಕ ಕೃಷಿ' ಕುರಿತ ಒಂದು ದಿನದ ವಿಚಾರ ವಿನಿಮಯ ಕಾರ್ಯಕ್ರಮ ತಾ|| 24-12-89ನೇ ಭಾನುವಾರ ಬೆಳಿಗ್ಗೆ 10 ಗಂಟೆಗೆ ಇಲ್ಲಿ ನಡೆಯಲಿದೆ.**

ಸಮೀಪದ ಹಡ್ಲುಕುಡಿಗೆ ನಂಜುಂಡ ರಾವ್ ಅವರ ಜಮೀನಿನಲ್ಲಿ ನಡೆಯುವ ಈ ಕಾರ್ಯಕ್ರಮದಲ್ಲಿ ಮಾಹಿತಿ, ಚರ್ಚೆ ಹಾಗೂ ಸ್ಲೈಡ್‌ಗಳ ಪ್ರದರ್ಶನ ಇರುತ್ತವೆ ನೈಸರ್ಗಿಕ ಕೃಷಿಯಲ್ಲಿ 12 ವರ್ಷಗಳ ಅನುಭವಿಯಾದ, ಧಾರವಾಡದ ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರದ ಉಪನ್ಯಾಸಕ ಪ್ರದೀಪ್ ತಪಸ್ ಅವರಲ್ಲದೆ, ಕೃಷಿ ಸಂಶೋಧನಾ ತಜ್ಞರು ಮತ್ತು ಕೃಷಿ ಇಲಾಖೆ ಅಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ.

ಮಧ್ಯಾಹ್ನ ಊಟದ ವ್ಯವಸ್ಥೆ ಮಾಡಬೇಕಿರುವುದರಿಂದ ಎಲ್ಲ ಆಸಕ್ತ ಕೃಷಿಕರೂ 10 ರೂ. ಪ್ರತಿನಿಧಿ ಶುಲ್ಕದೊಂದಿಗೆ ತಾ|| 22-12-89 ರ ಶುಕ್ರವಾರದೊಳಗಾಗಿ ಕೃ. ವಿ. ವಿ. ಕೇಂದ್ರದ ಕಾರ್ಯದರ್ಶಿ ಬಿ. ಎಸ್. ಶ್ರೀನಿವಾಸ್ ಅಥವಾ ಕೊಪ್ಪ ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಮುಂಚಿತವಾಗಿ ನೊಂದಾಯಿಸಲು ಕೋರಲಾಗಿದೆ.

## ಅಗಳಗಂಡಿ ಸುರೇಶ್‌ಗೆ ಬಿ.ಎ. ಯಲ್ಲಿ 7 ನೇ ರ್‍ಯಾಂಕ್

ಜಯಪುರ: ಶೃಂಗೇರಿಯ ಜೆ.ಸಿ.ಬಿ.ಎಂ. ಕಾಲೇಜು ವಿದ್ಯಾರ್ಥಿಯಾಗಿದ್ದ ಕೆ. ಆರ್. ಸುರೇಶ್ ಅಂತಿಮ ಬಿ. ಎ ಪರೀಕ್ಷೆಯಲ್ಲಿ 7ನೇ ರ್‍ಯಾಂಕ್ ಪಡೆದಿದ್ದಾರೆ.

ಜಯಪುರ ಪ್ರೌಢಶಾಲೆಯ ಹಳೆಯ ವಿದ್ಯಾರ್ಥಿಯಾಗಿದ್ದ ಈ ಪ್ರತಿಭಾವಂತ, ಅಗಳಗಂಡಿಯ ರಾಮಯ್ಯನವರ ಮಗನಾಗಿದ್ದು, ಪ್ರಸ್ತುತ ಉಡುಪಿಯಲ್ಲಿ ಕಾನೂನು ವ್ಯಾಸಂಗ ಮಾಡುತ್ತಿದ್ದಾರೆ (ಸಂ.ನ ಶೇಷಗಿರಿ).

## ಕೊಪ್ಪ ಮತ್ತು ಬಿಳಾಲ್‌ಕೊಪ್ಪದಲ್ಲಿ ಯಶಸ್ವಿ ಜೇಸೀ ಸಪ್ತಾಹ

ಕೊಪ್ಪ : ಇಲ್ಲಿನ ಹಾಗೂ ಬಿಳಾಲುಕೊಪ್ಪದ ಜೇಸೀ ಸಪ್ತಾಹ ಉಪಯುಕ್ತ ಮತ್ತು ಆಕರ್ಷಕ ಕಾರ್ಯಕ್ರಮಗಳಿಂದ ಕೂಡಿ ಯಶಸ್ವಿಯಾಗಿ ನಡೆದವು.

ಸಪ್ತಾಹದ ಅಂಗವಾಗಿ ಬಿಳಾಲ್‌ಕೊಪ್ಪದಲ್ಲಿ ನಡೆದ ಉಚಿತ ಮಣ್ಣು ಪರೀಕ್ಷೆ ಶಿಬಿರದಲ್ಲಿ 86 ಮಂದಿ ರೈತರ ಜಮೀನುಗಳ ಮಣ್ಣು ಪರೀಕ್ಷೆ ನಡೆಸಲಾಯಿತು. ಪರಿಸರ ಮತ್ತು ವನ್ಯ ಜೀವಿ ಸಂರಕ್ಷಣೆ ಕುರಿತು ಏರ್ಪಡಿಸಿದ್ದ ಚಲನ ಚಿತ್ರ ಪ್ರದರ್ಶನ ಆಕರ್ಷಣೆಯ ಜೊತೆಗೆ ಉತ್ತಮ ಬೋಧಪ್ರದವಾಗಿದ್ದು, ಈ ನಿಟ್ಟಿನಲ್ಲಿ ಒಂದು ಸ್ತುತ್ಯ ಪ್ರಯತ್ನವಾಗಿ ಮೂಡಿ ಬಂತು. ಡಿ. 9 ರಂದು. ನೆಲ್ಲಿಹಡ್ಲು ಬಿ. ಲಕ್ಷ್ಮೀನಾರಾಯಣಪ್ಪನವರು ಉದ್ಘಾಟಿಸಿದ ಈ ಸಪ್ತಾಹದ ಡಿ. 15ರ ಮುಕ್ತಾಯ ಸಮಾರಂಭದಲ್ಲಿ ಕಾಫಿ ಬೆಳೆಗಾರರಾದ ಚಿತ್ರದಕೊಳಲು ರಾಮಕೃಷ್ಣ ಹೆಬ್ಬಾರ್ ಬಹುಮಾನ ವಿತರಿಸಿದರು

ಕೊಪ್ಪದ ಕಾರ್ಯಕ್ರಮದಲ್ಲಿ ಕ್ವಿಜ್ ಸ್ಪರ್ಧೆ ಆಕರ್ಷಕವಾಗಿತ್ತು. ಮಕ್ಕಳ ಆರೋಗ್ಯ ತಪಾಸಣಾ ಶಿಬಿರ ಮತ್ತು ಬೇಬಿ ಶೋನಲ್ಲಿ 38 ಮಕ್ಕಳು ಭಾಗವಹಿಸಿದ್ದರು. ಅರಣ್ಯ ಇಲಾಖೆ, ಕ.ವಿ ಮಂ., ರಾಜ್ಯ ಸಾರಿಗೆ ಸಂಸ್ಥೆ, ಶಂಕರ್ ಕಂಪೆನಿ, ಪುರಸಭೆ ಮತ್ತು ಕೃಷಿ ಇಲಾಖೆ ಭಾಗವಹಿಸಿದ್ದ ಜನವಾಣಿ ಕಾರ್ಯಕ್ರಮ ಬಿರುಸಿನ ಚರ್ಚೆಯೊಂದಿಗೆ ಉಪಯುಕ್ತವಾಗಿತ್ತು.

ಪ್ರತಿ ಸಂಜೆ ನಡೆದ ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ವಿವಿಧ ಸ್ಪರ್ಧೆಗಳು ಜನರನ್ನು ಸೆಳೆಯುವಲ್ಲಿ ಯಶಸ್ವಿಯಾದವು. ಬಿಳಾಲ್‌ಕೊಪ್ಪ ಮತ್ತು ಸುತ್ತಮುತ್ತಲ ವಿವಿಧ ಕಲಾ ತಂಡಗಳು ಉತ್ತಮ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿದರು. ಕೊಪ್ಪದಲ್ಲಿ ಆಯುರ್ವೇದ ಕಾಲೇಜು ವಿದ್ಯಾರ್ಥಿಗಳು ವಿಶೇಷವಾಗಿ ಮೆಚ್ಚುಗೆ ಗಳಿಸಿದರು.

## ಬೀಗದ ಕೈ ಗೊಂಚಲು ಸಿಕ್ಕಿದೆ

ಸಾರ್ವಜನಿಕರೊಬ್ಬರಿಗೆ ಮಹಿಳಾ ಸಮಾಜದೆದುರು 4 ಬೀಗದಕೈಗಳಿರುವ ಗೊಂಚಲು ಸಿಕ್ಕಿದೆ ಕಳೆದುಕೊಂಡಿರುವವರು 'ಮುಂಜಾವು' ಕಾರ್ಯಾಲಯದಿಂದ ಅದರ ಗುರುತು ತಿಳಿಸಿ, ಪ್ರಕಟಣೆಯ ಖರ್ಚು 20 ರೂ.ಗಳನ್ನು ನೀಡಿ ಅದನ್ನು ಪಡೆದುಕೊಳ್ಳಬಹುದು

## ಶಾಸಕ ಶಾಮಣ್ಣನವರ ಮೊಟ್ಟ ಮೊದಲ ತಾ|ಪಂ|ಸಮಿತಿ ಸಭೆ

ಕೊಪ್ಪ : ಶೃಂಗೇರಿ ಕ್ಷೇತ್ರದ ನೂತನ ಶಾಸಕ ಯು. ಕೆ ಶಾಮಣ್ಣ ಅವರು ಮೊಟ್ಟ ಮೊದಲ ಬಾರಿಗೆ ಭಾಗವಹಿಸಿದ್ದ ಕೊಪ್ಪ ತಾ| ಪಂಚಾಯ್ತಿ ಸಮಿತಿ ಸಭೆ ಡಿ. 12 ರಂದು ನಡೆಯಿತು. ತಾ| ಪಂ| ಸಮಿತಿಯ ಎಲ್ಲ ಪ್ರತಿನಿಧಿಗಳು ಹಾಗೂ ತಾಲ್ಲೂಕಿನ ಬಹುತೇಕ ಎಲ್ಲ ಇಲಾಖೆಗಳ ಅಧಿಕಾರಿಗಳು ಹಾಜರಿದ್ದು, ಬಿಸಿ ಬಿಸಿ ವಾಗ್ವಾದಗಳೂ ಸೇರಿದಂತೆ ಹಲವಾರು ವಿಚಾರಗಳನ್ನು ಸಭೆ ಚರ್ಚಿಸಿತು

## ಕೊಪ್ಪದಲ್ಲಿ 'ಶಾರದಾ ರಥ'ದ ವಿಜೃಂಭಣೆಯ ಮೆರವಣಿಗೆ

**ಕೊಪ್ಪ : ವಿಶ್ವ ಹಿಂದು ಪರಿಷತ್ತು, ಅಯೋಧ್ಯೆಯಲ್ಲಿ ನಿರ್ಮಿಸಲು ಉದ್ದೇಶಿಸಿರುವ ಶ್ರೀರಾಮ ದೇವಾಲಯಕ್ಕಾಗಿ 'ರಾಮಶಿಲೆ' ಹೆಸರಿನ ಇಟ್ಟಿಗೆಗಳನ್ನು ಹೊತ್ತು ಶೃಂಗೇರಿಯಿಂದ ಹೊರಟಿರುವ ಶಾರದಾ ರಥದ ಮೆರವಣಿಗೆ ಇಲ್ಲಿ ಡಿ. 14ರಂದು ವಿಜೃಂಭಣೆಯಿಂದ ನಡೆಯಿತು.**

ಶೃಂಗೇರಿಯ ಭಕ್ತರೊಬ್ಬರ ಲಾರಿಯ ಮೇಲೆ ನಿರ್ಮಿಸಿರುವ 'ರಥ' ನ. ರಾ. ಪುರದಿಂದ ಬರುವ ಮಾರ್ಗದಲ್ಲಿ ಕುದುರೆಗುಂಡಿಯ ಆಚೆ ತಹಸೀಲ್ದಾರ್ ಅವರು ಎದುರುಗೊಂಡು, ಶಾಂತಿ ಸುವ್ಯವಸ್ಥೆಯ ಉಸ್ತುವಾರಿ ವಹಿಸಿದರು.

ಬಾಳಗಡಿಯ ಪ್ರವೇಶದಲ್ಲಿ ವಿ.ಹಿಂ.ಪ. ಮುಖಂಡರು ಮತ್ತು ನಾಗರಿಕರು ಮೆರವಣಿಗೆಯನ್ನು ಎದುರ್ಗೊಂಡು ಬಾಳಗಡಿಯ ಮೂಲಕ ಮೇಲಿನಪೇಟೆ ಈಶ್ವರ ದೇವಸ್ಥಾನದ ಬಳಿಗೆ ತಂದು ನಿಲ್ಲಿಸಿ, ಮಧ್ಯಾಹ್ನದ ನಂತರ ಮೇಲಿನಪೇಟೆ, ಕಲ್ಯಾಣ ಮಂಟಪದ ರಸ್ತೆ, ಕೆಳಪೇಟೆಗಳಲ್ಲಿ ಮೆರವಣಿಗೆ ನಡೆಸಿ ಗಣಪತಿ ಪೆಂಡಾಲ್ ಸ್ಥಳದಲ್ಲಿ ನಿಲ್ಲಿಸಲಾಯಿತು.

ಕಾವಿ ಧ್ವಜಗಳನ್ನು ಹೊತ್ತ ಸ್ಕೂಟರ್, ಬೈಕ್, ಆಟೋರಿಕ್ಷಾ, ಕಾರು-ಜೀಪುಗಳು ಸೇರಿ ಸುಮಾರು 50-60 ವಾಹನಗಳು ಮೆರವಣಿಗೆಯ ಮುಂಭಾಗದಲ್ಲಿದ್ದವು ಬೆಳಗಿನ ಮೆರವಣಿಗೆಯಲ್ಲಿ ಸುಮಾರು ಏಳೆಂಟು ನೂರರಿಂದ ಒಂದು ಸಾವಿರದಷ್ಟು ಜನರಿದ್ದು, ಮಧ್ಯಾಹ್ನದ ನಂತರ ಈ ಸಂಖ್ಯೆ ಗಣನೀಯವಾಗಿ ಕುಸಿದಿತ್ತು. ಜನರು ಮುಖ್ಯವಾಗಿ ಮಹಿಳೆಯರು ತಮ್ಮ ಮನೆಗಳ ಬಳಿ ನಿಂತು ಹಣ್ಣು ಕಾಯಿ ನೀಡಿ, ಮೆರವಣಿಗೆ ವೀಕ್ಷಿಸಿದರು.

"ನಾವೆಲ್ಲ ಹಿಂದು. ನಾವೆಲ್ಲ ಒಂದು," "ಕಟ್ಟುವೆವು ಕಟ್ಟುವೆವು ರಾಮಮಂದಿರ ಕಟ್ಟುವೆವು", "ಹಿಂದು ದೇಶದಿ. ಹುಟ್ಟಿದ ಬಳಿಕ ಹಿಂದು ಎನ್ನಲು ಭಯವೇಕೆ?" ಮುಂತಾದ ಘೋಷಣೆಗಳನ್ನು ಕೂಗುತ್ತಿದ್ದ ಕಾರ್ಯಕರ್ತರಲ್ಲದೆ, ಬ್ಯಾಂಡ್ ಮೇಳಕ್ಕೆ ಸರಿಯಾಗಿ ಕುಣಿಯುತ್ತಿದ್ದ ಯುವಕರ ತಂಡವೂ ಮೆರವಣಿಗೆಯಲ್ಲಿತ್ತು.

ಮಸೀದಿ ಮತ್ತು ಚರ್ಚುಗಳ ಮುಂಭಾಗ ಹೊರತುಪಡಿಸಿ ಅಲ್ಲಲ್ಲಿ ಪಟಾಕಿಗಳನ್ನು ಸಿಡಿಸಲಾಯಿತು. ಮಧ್ಯಾಹ್ನದ ನಂತರ ಕೆಲವು ಶಾಲೆಗಳ ಅಧ್ಯಾಪಕರುಗಳು ಮಕ್ಕಳಿಗೆ ರಜೆ ನೀಡಿ ಮೆರವಣಿಗೆಯಲ್ಲಿ ಕರೆ ತಂದಿದ್ದರು.

### ಭಾರೀ ಬಂದೋಬಸ್ತ್

ತರೀಕೆರೆ ಮತ್ತು ಬೆಂಗಳೂರಿನ ಡಿವೈಎಸ್ಪಿಗಳು, ನಾಲ್ವರು ಸರ್ಕಲ್ ಇನ್‌ಸ್ಪೆಕ್ಟರುಗಳು ಮತ್ತು ಹತ್ತಾರು ಜನ ಸಬ್ ಇನ್‌ಸ್ಪೆಕ್ಟರ್‌ಗಳಲ್ಲದೆ ಮೀಸಲು ಪೋಲೀಸ್‌ನ 4 ಪಡೆಗಳೂ ಸೇರಿದಂತೆ ಭಾರೀ ಬಿಗಿಯಾದ ಪೋಲೀಸ್ ಬಂದೋಬಸ್ತ್ ಏರ್ಪಡಿಸಲಾಗಿತ್ತು.

ರಾತ್ರಿ ಗಣಪತಿ ಪೆಂಡಾಲ್ ಸ್ಥಳದಲ್ಲಿ ನಡೆದ ಸಭೆಯಲ್ಲಿ ಕರ್ನಾಟಕದ ವಿ.ಹಿಂ.ಪ. ಕಾರ್ಯದರ್ಶಿ ನರಸಿಂಹ ಮೂರ್ತಿ ಅಯ್ಯಂಗಾರ್ ಪ್ರಧಾನ ಭಾಷಣಕಾರರಾಗಿದ್ದರು. ವೇದಿಕೆಯ ಮೇಲಿಂದ ನ. ರಾ. ಪುರ ಬಸ್ತಿಮಠದ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳು ಆಶೀರ್ವಚನ ನೀಡಿದರು. ಅರಮನೆ ಶ್ರೀನಿವಾಸ ಶರ್ಮ ಅವರೂ ಮಾತನಾಡಿದರು. ಶೀನಭಂಡಾರಿ ಮತ್ತು ಕೆ. ಆರ್. ವೇಣುಗೋಪಾಲ್ ಇವರನ್ನು ಮುಖ್ಯ ಅತಿಥಿಗಳಾಗಿ ಆಹ್ವಾನಿಸಲಾಗಿತ್ತು.

ರಥ ಯಾತ್ರೆ ರಾತ್ರಿ ಬಸ್ತಿ ಮಠದಲ್ಲಿ ತಂಗಿತ್ತು. ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ, ಶೃಂಗೇರಿಯ ಕಲಾರಂಗದವರಿಂದ ಎಸ್. ವಿ ರಮೇಶ್ ನಿರ್ದೇಶಿತ ರೂಪಕ 'ಪುಣ್ಯಕೋಟಿ' ಹಾಗೂ ಶಿವಪುರದ ಶಂಕರ ನಾರಾಯಣ ಅವರ ಯಕ್ಷಗಾನ ಬೊಂಬೆಯಾಟ ಇವೂ ಸೇರಿದ್ದವು. ಡಿ. 15 ರ ಬೆಳಿಗ್ಗೆ ರಥ ತೀರ್ಥಹಳ್ಳಿಯ ಕಡೆಗೆ ಪ್ರಯಾಣ ಮುಂದುವರಿಸಿದಾಗ ಗಡಿಕಲ್ಲಿನವರೆಗೆ ಹೋಗಿ ಬೀಳ್ಕೊಡಲಾಯಿತು.

ಇದೇ ರೀತಿಯ ವಿಜೃಂಭಣೆಯ ಮೆರವಣಿಗೆಗಳು ಜಯಪುರ, ಲೋಕನಾಥಪುರ, ನ. ರಾ. ಪುರ, ಹುಂಚದಕಟ್ಟೆ ಮುಂತಾದೆಡೆಗಳಲ್ಲೂ ನಡೆದ ವರದಿಗಳು ಬಂದಿವೆ. ಕಳೆದ ಕೋರಿಣಾ ಮತ್ತಿತರ ಆಲಂಕಾರಗಳಿಗೆ ಕೊಪ್ಪ ಬೇರೆ ಊರುಗಳಿಗಿಂತ ಒಂದು ಕೈ ಮೇಲಾಗಿತ್ತು ಎಂದು ಕಾರ್ಯಕರ್ತರ ಅಭಿಪ್ರಾಯ. ಶೃಂಗೇರಿ, ಕೊಪ್ಪ, ನ. ರಾ. ಪುರ ತಾಲೂಕುಗಳ ಎಲ್ಲಿಯೂ ರಥ ಯಾತ್ರೆ ಯಾವುದೇ ಅಹಿತಕರ ಘಟನೆಗಳಿಲ್ಲದೆ [illegible]ವಾಗಿ ನಡೆದ ವರದಿಗಳು ತಿಳಿಸಿವೆ.

# ಪರೀಕ್ಷೆಗಳೋ — ಭಯಾನಕ ದುಃಸ್ವಪ್ನಗಳೋ !

ಪರೀಕ್ಷೆಗಳು ಹತ್ತಿರ ಬಂದಂತೆಲ್ಲ ಮಕ್ಕಳಿಗೆ ಬೆನ್ನಿನ ಮೇಲೆ ಹೊರುವ ಪುಸ್ತಕಗಳ ಭಾರದ ಜೊತೆಗೆ ಮನಸ್ಸಿನ ಮೇಲಿನ 'ಭಾರ'ವೂ ಹೆಚ್ಚುತ್ತಾ ಹೋಗುತ್ತದೆ ಖಾಸಗಿ ಶಾಲೆಯಾದರೆ, ಶಾಲೆಯ ಪ್ರತಿಷ್ಠೆಯ, ಮರ್ಯಾದೆಯ ಪ್ರಶ್ನೆಯಾಗಿಬಿಡುವ ಈ ಪರೀಕ್ಷೆಗಳು ಮಕ್ಕಳಿಗೊಂದು ಮಾನಸಿಕ ಹಿಂಸೆಯಾಗಿಬಿಡುತ್ತವೆ.

ಶೇ. 90ಕ್ಕಿಂತ ಹೆಚ್ಚು ಎಸ್. ಎಸ್. ಎಲ್.ಸಿ. ಫಲಿತಾಂಶ ಗಳಿಸುವ ಖಾಸಗಿ ಪ್ರೌಢಶಾಲೆಗಳಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಗಮನಿಸಿದರೆ ದಿಗ್ಭ್ರಮೆಯಾಗುತ್ತದೆ. ಪರೀಕ್ಷೆಗಳು ಹತ್ತಿರವಾಗುತ್ತಿದ್ದಂತೆಯೇ ಪರೀಕ್ಷೆಯ ಹೆಸರಲ್ಲಿ ಅಧ್ಯಾಪಕರು ಮಕ್ಕಳ ಮನಸ್ಸಿನ ಮೇಲೆ ಸವಾರಿ ಮಾಡಲಾರಂಭಿಸುತ್ತಾರೆ. ಶಾಲೆಗೆ 'ಅಪಕೀರ್ತಿ ತರುವಂತಹ' ಮಕ್ಕಳು ಶಾಲೆ ಬಿಡಬೇಕು ಇಲ್ಲವೆ, ರಾತ್ರಿ-ಹಗಲೂ ಓದಿ-ಬರೆದು ಶಾಲೆಯ 'ಮರ್ಯಾದೆ' ಉಳಿಸುವಂತೆ, ಅಕ್ಷರಶಃ ಹಿಂಸಾತ್ಮಕವಾದ ಶಿಕ್ಷೆ ಕೊಡಲಾಗುತ್ತದೆ. (ಖಾಸಗಿ ಪ್ರೌಢಶಾಲೆಯೊಂದರ ರಕ್ತದೊತ್ತಡ ಖಾಯಿಲೆಯ ಮುಖ್ಯೋಪಾಧ್ಯಾಯರೊಬ್ಬರು 'ಕಪಾಳ ಮೋಕ್ಷ'ಕ್ಕೆ ಹೆಸರುವಾಸಿಯಾದವರು. ಸಿಟ್ಟಿನ ಭರದಲ್ಲಿ ಅವರು ಹೊಡೆದ ಹೊಡೆತಕ್ಕೆ ಹುಡುಗಿಯೊಬ್ಬಳು ಎಚ್ಚರ ತಪ್ಪಿ ಬಿದ್ದಿದ್ದಳು! ನಂತರ ಪೋಷಕರು ಆಕೆಯನ್ನು ಬೇರೆ ಶಾಲೆಗೆ ಸೇರಿಸಿದರು.) ಇಂಥ ಕ್ರೌರ್ಯಯುತ ಹುಂಬತನದ ಪರಿಣಾಮಗಳ ಬಗೆಗೆ ನಮ್ಮ ಅಧ್ಯಾಪಕರುಗಳಾಗಲಿ, ಪೋಷಕರುಗಳಾಗಲಿ ಗಮನ ಹರಿಸುವುದೇ ಇಲ್ಲವೆನ್ನುವುದು ಮಕ್ಕಳ ದುರ್ದೈವವೇ ಸರಿ.

ಹಾಗಿದ್ದರೆ ಪರೀಕ್ಷೆಯಲ್ಲಿ ಪಾಸಾಗುವುದೂ,

● 'ಶೃಂಗ', ಶೃಂಗೇರಿ

ಹೆಚ್ಚು ಅಂಕ ಗಳಿಸುವುದೂ ಅಗತ್ಯವಲ್ಲವೆ? ಅಗತ್ಯ ನಿಜ. ಆದರೆ ಮಕ್ಕಳ ಫಲಿತಾಂಶದ ಮೇಲೆ ಅಧ್ಯಾಪಕರುಗಳ ಪೊಳ್ಳು ಪ್ರತಿಷ್ಠೆಯ ಪ್ರಭಾವ ಬೀರಬಾರದು ಎಂಬುದಷ್ಟೇ ನನ್ನ ಅಭಿಪ್ರಾಯ. **ಮಕ್ಕಳ ಮನಸ್ಸಿನ ಮೇಲೆ ಹಿಂಸೆಗಿಂತಲೂ ಪ್ರೀತಿ ಹೆಚ್ಚು ಪರಿಣಾಮ ಬೀರಬಲ್ಲುದು ಎಂಬ ಸತ್ಯವನ್ನು ಪಾಶ್ಚಾತ್ಯರು ಕಂಡುಕೊಂಡು ತಮ್ಮ ಶಿಕ್ಷಣ ಪದ್ಧತಿಯಲ್ಲಿ ಅಳವಡಿಸಿಕೊಳ್ಳುತ್ತಿರುವಾಗ ನಮ್ಮಲ್ಲಿನ್ನೂ ಗೊಡ್ಡು ಸಂಪ್ರದಾಯಗಳಿಗೇ ಜೋತುಬಿದ್ದು ಮಕ್ಕಳ ಜೀವ ಹಿಂಡಲಾಗುತ್ತಿದೆ.** ಮಕ್ಕಳ ಈ ಶೋಚನೀಯ ಸ್ಥಿತಿಯ ಬಗೆಗೆ ಖಂಡಿತ ಮತ್ತೊಮ್ಮೆ ಯೋಚಿಸಬೇಕಾಗಿದೆ.

ಮಕ್ಕಳನ್ನು ಇಷ್ಟ ಪಡುತ್ತಿದ್ದ ಚಾಚಾ ನೆಹರೂ ಬದುಕಿದ್ದ ಈ ದೇಶದಲ್ಲಿ, ಹಿಂಸೆ-ಕ್ರೌರ್ಯ ತ್ಯಜಿಸಿ, ಪ್ರೀತಿ-ಅಹಿಂಸೆಯಿಂದ ಜಗತ್ತನ್ನೇ ಗೆಲ್ಲಬಹುದೆಂದು ತೋರಿಸಿಕೊಟ್ಟ ಗಾಂಧೀಜಿಯ ಈ ನಾಡಿನಲ್ಲಿ, ಶಾಲೆಗಳು ಹಿಂಸೆಯ ಗೂಡುಗಳಾಗಿರುವುದಕ್ಕೆ ಕಾರಣ ನಮ್ಮ ಸಮಾಜದ ಸಂಪ್ರದಾಯವಾದಿ ಮನಃಸ್ಥಿತಿಯಲ್ಲದೆ ಎಂದು ಹೇಳಿದರೆ ಊಹೆಯಾಗಲಾರದು.

**"ಶಾಲೆಗಳಲ್ಲಿ ಬಲ ಪ್ರಯೋಗಮಾಡಿ ಕಲಿಸುವ ಅತಿಯಾದ ಶಿಸ್ತೇ, ಮಕ್ಕಳು ಮುಂದೆ ತೋರುವ ಅಶಿಸ್ತಿಗೆ ಕಾರಣ"** ಎನ್ನುವ ಕತೆಗಾರ, ಖ್ಯಾತ ಕವಿ ಹಾಗೂ ಶಿಕ್ಷಣ ತಜ್ಞರಾದ ರಾಮಚಂದ್ರ ಶರ್ಮರು, ಮಕ್ಕಳ ಸ್ಥಿತಿಗತಿ ವಿವರಿಸುತ್ತಾ ಬರೆದಿರುವ (12-11-89 ರ 'ಪ್ರಜಾವಾಣಿ' ಸಾಪ್ತಾಹಿಕ ಪುರವಣಿ) ಈ ಕೆಳಗಿನ ಮಾತುಗಳನ್ನು ಇಲ್ಲಿ ಉಲ್ಲೇಖಿಸಿದರೆ ತಪ್ಪಾಗಲಾರದು: **ಎಲ್ಲಿಯವರೆಗೆ ನಾವು ತರಗತಿಗಳನ್ನು ಪೋಲಿಸ್ ಠಾಣೆಗಳಾಗಿ ನಡೆಸಿಕೊಂಡು ಹೋಗುತ್ತೇವೆಯೋ, ಎಲ್ಲಿಯವರೆಗೆ ಮಕ್ಕಳು ನಿರ್ಭಯವಾಗಿ ಪ್ರಶ್ನೆ ಕೇಳುವುದಕ್ಕೆ ಅವಕಾಶವಿಲ್ಲವೋ ಅಲ್ಲಿಯವರೆಗೆ ನಮ್ಮ ವಿದ್ಯಾಭ್ಯಾಸ ಕ್ರಮಕ್ಕೆ ಮೋಕ್ಷವಿಲ್ಲ"**

### ಪದ್ಯ ದಂಕಣ

**ಮುದಂಕ**

ಗುಟುಕು ನುಂಗುತ್ತಿರುವ
ಮರ ಕುಟುಕ ಹಕ್ಕಿಗಳೆ,
ಚುಟುಕ ಬರೆದೆನು ನಾನು
ನಿಮ್ಮನ್ನು ಕುರಿತು.

ನಗೆಯ ಮಾತಲ್ಲ ಇದು
ಹಗೆಯ ನುಡಿಯಲ್ಲ.
ಚೈತ್ರ ಬರುತಿದೆಯೆಂಬ
ಸಂತಸದ ಸಂಭ್ರಮಕೆ
ಮೈ ಮರೆಯಲಾರದೆಯೆ
ಮರ ಮರುಗಿ ನುಡಿದ ನುಡಿ !
ಮರ ಬಳ್ಳಿ ಗಿಡಗಳಿಗೆ
ಮೌನವಾಗಿ ನುಡಿದ ನುಡಿ.

ಮರಕೆ ಮರುಗುವ ಮಂದಿ
ಧರೆಗೆ ಬೇಕಿದೆ ಈಗ
"ಜನನೀ ಜನ್ಮಭೂಮಿಶ್ಚ
ಸ್ವರ್ಗಾದಪಿ ಗರೀಯಸಿ."

—ಎಚ್.ಎಲ್. ಮಹಾಬಲ ರಾವ್

# ಕಿಗ್ಗದ ಹಿರಿಯ ಪ್ರಾಥಮಿಕ ಶಾಲೆ ವಜ್ರ ಮಹೋತ್ಸವದ ಹೊಸ್ತಿಲಲ್ಲಿ

ವಿಭಾಂಡಕ ಋಷಿಗಳ ಮಗ, ಮಳೆಯ ಮುನಿ ಎಂದು ಪುರಾಣಗಳಲ್ಲಿ ವರ್ಣಿಸಲ್ಪಟ್ಟಿರುವ ಋಷ್ಯಶೃಂಗರ ತಪೋ ಭೂಮಿ ಎಂದು ಆಸ್ತಿಕರು ನಂಬಿರುವ ಕಿಗ್ಗ ಜನವರಿಯಲ್ಲಿ ಅಪರೂಪದ ಸಮಾರಂಭವೊಂದನ್ನು ಎದುರು ನೋಡುತ್ತಿದೆ.

ದೇಶ 21ನೇ ಶತಮಾನಕ್ಕೆ ದಾಪುಗಾಲಿಡುತ್ತಿರುವ ಬಗೆಗಿನ ಬಣ್ಣದ ಮಾತುಗಳ ಗಾಳಿಗೋಪುರ ಕಟ್ಟುತ್ತಿರುವಾಗಲೇ, ಶೃಂಗೇರಿ ತಾಲ್ಲೂಕಿನ ಹೋಬಳಿ ಕೇಂದ್ರವಾದ ಈ ಪುಟ್ಟ ಊರು ಇನ್ನೂ ಕೂಡ ಜಿಲ್ಲೆಯ ಅತ್ಯಂತ ಹಿಂದುಳಿದ ಪ್ರದೇಶಗಳಲ್ಲಿ ಒಂದಾಗಿಯೇ ಉಳಿದಿದೆ. ಆದರೆ ಇಲ್ಲಿ 1914ರಷ್ಟು ಹಿಂದೆಯೇ ಸ್ಥಾಪಿತವಾಗಿದ್ದ ಪ್ರಾಥಮಿಕ ಶಾಲೆ ಹಿರಿಯ ಪ್ರಾಥಮಿಕ ಶಾಲೆಯಾಗಿ ಬೆಳೆದು ಈ ಸಾಲಿಗೆ 75 ವರ್ಷಗಳನ್ನು ಪೂರೈಸುತ್ತಿರುವುದು ಸಣ್ಣ ಸಾಧನೆಯೇನಲ್ಲ. ಈ ಶುಭ ಸಂದರ್ಭದ ಸವಿ ನೆನಪಿಗಾಗಿ ವಜ್ರಮಹೋತ್ಸವ ನಡೆಯಲಿರುವುದೇ ಈ ಪುಟ್ಟ ಊರು ಎದುರು ನೋಡುತ್ತಿರುವ ಸಡಗರ.

ಇದಕ್ಕಾಗಿ ವಜ್ರ ಮಹೋತ್ಸವ ಸಮಿತಿಯೊಂದು ಈಗಾಗಲೇ ಕಾರ್ಯಪ್ರವೃತ್ತವಾಗಿದೆ. ಈ ಸ್ಮರಣೀಯ ಸಂದರ್ಭದ ಸವಿ ನೆನಪಿಗಾಗಿ 40 ಸಾವಿರ ರೂ. ಗಳ ಅಂದಾಜು ವೆಚ್ಚದಲ್ಲಿ, ಊರವರ ಉಪಯೋಗಕ್ಕೂ ಲಭ್ಯವಾಗುವಂತೆ ಬಯಲು ರಂಗಮಂದಿರವೊಂದನ್ನು ನಿರ್ಮಿಸಲು ಸಮಿತಿ ಯೋಚಿಸಿದೆ. ಜೊತೆಗೆ ವಿವಿಧ ಸಾಹಿತ್ಯಕ, ಸಾಂಸ್ಕೃತಿಕ ಮತ್ತಿತರ ಕಾರ್ಯಕ್ರಮಗಳೂ ನಡೆಯಲಿವೆ.

**ದೇಣಿಗೆಗಾಗಿ ಮನವಿ**

ಈ ಕಾರ್ಯಕ್ರಮಗಳಿಗಾಗಿ, ಮುಖ್ಯತಃ ರಂಗ ಮಂದಿರ ನಿರ್ಮಾಣಕ್ಕಾಗಿ ಶಾಲೆಯ ಹಳೆಯ ವಿದ್ಯಾರ್ಥಿಗಳಿಂದ ಹಾಗೂ ಅಭಿಮಾನ ಪೋಷಕರಿಂದ ಉದಾರವಾಗಿ ವಂತಿಗೆಯನ್ನು ಸಮಿತಿ ಅಪೇಕ್ಷಿಸಿದೆ. 1001 ರೂ. ಮತ್ತು ಮೇಲ್ಪಟ್ಟು ಕೊಡುಗೆ ನೀಡುವ ದಾನಿಗಳ ಅಥವಾ ಅವರು ಸೂಚಿಸುವ ವ್ಯಕ್ತಿಗಳ ಭಾವ ಚಿತ್ರವನ್ನು ಶಾಲೆಯ ಸಭಾಂಗಣದಲ್ಲಿ ಹಾಕಲಾಗುವುದು. 201 ರೂ. ನೀಡುವವರ ಹೆಸರುಗಳನ್ನು ಸಭಾಂಗಣದ ಫಲಕದಲ್ಲಿ ಬರೆಸಲಾಗುತ್ತದೆ.

ದಾನಿಗಳು ತಮ್ಮ ಕೊಡುಗೆಗಳನ್ನು ಕಿಗ್ಗ ಸಿಂಡಿಕೇಟ್ ಬ್ಯಾಂಕ್‌ನ ಉಳಿತಾಯ ಖಾತೆ ಸಂಖ್ಯೆ 1246 ಕ್ಕೆ 4 ಕಂತುಗಳಲ್ಲಿ ಜಮಾ ಮಾಡಬಹುದಾದ ಸೌಲಭ್ಯವೂ ಇದೆ

"ವ್ಯಕ್ತಿಯ ಜೀವನದಲ್ಲಿ ಅಪೂರ್ವವಾದ ನಿಮ್ಮ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿ ನಿಮ್ಮ ಭವಿಷ್ಯದ ಬಾಳಿಗೆ ಭದ್ರ ಬುನಾದಿಯನ್ನು ದೊರಕಿಸಿಕೊಟ್ಟು, ಯೋಗ್ಯ ನಾಗರಿಕರನ್ನಾಗಿ ನಿಮ್ಮನ್ನು ರೂಪಿಸಲು ತನ್ನ ಕೊಡುಗೆಯನ್ನಿತ್ತಿರುವ ಈ ಶಾಲೆಯ ವಜ್ರ ಮಹೋತ್ಸವದಲ್ಲಿ ಭಾಗವಹಿಸುವುದು, ತನು-ಮನ-ಧನ ಸಹಾಯ ನೀಡುವುದು- ನೀವು ಕಲಿತ ಶಿಕ್ಷಣ ಸಂಸ್ಥೆಗೆ ನೀವು ಕೊಡುವ 'ಗುರು ಕಾಣಿಕೆ' ಎಂದು ನೀವೂ ಯೋಚಿಸುವಿಲ್ಲವೇ?" ಎಂದು ಈ ಶಾಲೆಯ ಹಳೆಯ ವಿದ್ಯಾರ್ಥಿಗಳನ್ನು ಪ್ರಶ್ನಿಸುವ ಮೂಲಕ ಮೇಲ್ಕಂಡ ಎರಡರಲ್ಲಿ ಯಾವುದಾದರೊಂದು ಯೋಜನೆಯ ಮೂಲಕ ಈ ಕಾರ್ಯಕ್ರಮಗಳನ್ನ ಯಶಸ್ವಿಗೊಳಿಸಬೇಕಾಗಿ ಸಮಿತಿ ಮನವಿ ಮಾಡಿದೆ.

**ಶಾಲೆ ನಡೆದು ಬಂದ ದಾರಿ**

ಮಲೆನಾಡಿನ ಅತ್ಯಂತ ಮೂಲೆಯಲ್ಲಿ, ನರಸಿಂಹ ಪರ್ವತಗಳ ತಪ್ಪಲಲ್ಲಿ ಚದುರಿಕೊಂಡಿರುವ ಹತ್ತಾರು ಚಿಕ್ಕ ಪುಟ್ಟ ಹಳ್ಳಿಗಳ ಕೇಂದ್ರ ಸ್ಥಳ ಕಿಗ್ಗ ಇದು ಶೃಂಗೇರಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವೂ ಹೌದು. ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಅಪರೂಪವೆನ್ನಬಹುದಾದ ಒಂದು ಪೋಲೀಸ್ ಠಾಣೆಯನ್ನೂ (ಔಟ್ ಪೋಸ್ಟ್) ಒಂದು ಶಾಲೆಯನ್ನೂ ಹೊಂದಿದ್ದ ಸ್ಥಳ.

ಇಲ್ಲಿ 1914ರಲ್ಲಿ ಆರಂಭವಾಗಿದ್ದ ಆ ಕಿರಿಯ ಪ್ರಾಥಮಿಕ ಶಾಲೆಯೇ ಮುಂದೆ 1959-60ರಲ್ಲಿ ಹಿರಿಯ ಪ್ರಾಥಮಿಕ ಶಾಲೆಯಾಯಿತು. ಅಲ್ಲಿಯವರೆಗೆ ಶಾಲಾಭಿವೃದ್ಧಿ ಸಮಿತಿಗೆ ಹುಲ್ಗಾರ್ ಚಂದ್ರಮೌಳಿರಾವ್ ಅಧ್ಯಕ್ಷರಾಗಿದ್ದರು. ಆಗ ವಾರ್ಷಿಕ ದಾಖಲಾತಿ 15ರಿಂದ 20 ಇರುತ್ತಿತ್ತು.

ಹಿರಿಯ ಪ್ರಾಥಮಿಕ ಶಾಲೆಯಾದ ಮೇಲೆ ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರಾದ ಎಸ್. ಗುಂಡಣ್ಣ ಹೆಗ್ಡೆಯವರು ಇಂದಿಗೂ- ಸುಮಾರು 30 ವರ್ಷ ಕಾಲ-ಆ ಸ್ಥಾನದಲ್ಲಿ ಮುಂದುವರಿದುಕೊಂಡು ಬಂದಿರುವುದು ಒಂದು ವಿಶೇಷವೇ.

1964ರಲ್ಲಿ, ವಿ.ರಾಮಭಟ್ ಮುಖ್ಯೋಪಾಧ್ಯಾಯರಾಗಿದ್ದು, 7 ತರಗತಿಗಳಿಂದ 100 ಜನ ವಿದ್ಯಾರ್ಥಿಗಳನ್ನು ಹೊಂದಿದ್ದ ಶಾಲೆ ಹಳೆಯ ಪೋಲೀಸ್ ಔಟ್‌ಪೋಸ್ಟ್‌ನಲ್ಲಿ ನಡೆಯುತ್ತಿತ್ತು. ಸ್ಥಳ ಮತ್ತು ಪೀಠೋಪಕರಣಗಳ ಅಭಾವ ತೀವ್ರವಾಗಿತ್ತು. ಆ ವರ್ಷ ಜನವರಿಯಲ್ಲಿ ಕಿಗ್ಗಕ್ಕೆ ಭೇಟಿ ನೀಡಿದ್ದ ಆಗಿನ ಮುಖ್ಯ ಮಂತ್ರಿ ಎಸ್. ಆರ್. ಕಂಠಿಯವರ ಗಮನಕ್ಕೆ ಈ ವಿಚಾರ ತಂದಾಗ ಅವರು 15 ಸಾವಿರ ರೂ. ಗಳನ್ನು ಶಾಲಾ ಕಟ್ಟಡಕ್ಕಾಗಿ ಸ್ಥಳದಲ್ಲೇ ಮಂಜೂರು ಮಾಡಿ, ಶಾಲೆಯ ಪ್ರಗತಿಗೆ ಕಾರಣರಾದರು.

1969 ರಲ್ಲಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯಾಗಿ ಬಡ್ತಿ ಹೊಂದಿದ ಈ ಶಾಲೆಗೆ ಮತ್ತೆ 3 ಕೊಠಡಿಗಳು ಮಂಜೂರಾಗಿ, ಚಂದ್ರಮೌಳಿರಾವ್ ಅವರು ಸಭಾಮಂದಿರದ 3 ಕೊಠಡಿಗಳನ್ನು ನಿರ್ಮಿಸಿಕೊಟ್ಟರು. ನಂತರ 2 ವರ್ಷಕ್ಕೊಂದರಂತೆ ಈಗ 12 ಕೊಠಡಿಗಳಿವೆ. ಎಂ. ಆರ್. ಚಿನ್ನಪ್ಪ ಈ ಶಾಲೆಯ ಮೊದಲ ಪದವೀಧರ ಮುಖ್ಯೋಪಾಧ್ಯಾಯರಾಗಿದ್ದು, ಹಾಲಿ ಆ ಹುದ್ದೆ ಖಾಲಿಯಿದೆ.

ಈಗ ಈ ಶಾಲೆಯಲ್ಲಿ ಪೂರ್ವ ಪ್ರಾಥಮಿಕದಿಂದ 7ನೇ ತರಗತಿಯವರೆಗೆ 380 ವಿದ್ಯಾರ್ಥಿಗಳಿದ್ದು, ಐವರು ಶಿಕ್ಷಕಿಯರೂ ಐವರು ಶಿಕ್ಷಕರೂ ಸೇರಿ 10 ಜನರ ಉತ್ತಮ ಬೋಧಕ ವರ್ಗವಿದೆ. ಈ ಶಾಲೆಯ ಆರಂಭದಿಂದ ಈವರೆಗೆ ಮುಖ್ಯೋಪಾಧ್ಯಾಯರಾಗಿ ದುಡಿದಿರುವ ಎಲ್. ಬಾಲಕೃಷ್ಣರಾವ್, ಎಲ್. ಗೋಪಾಲ್, ವೆಂಕಟಾಚಲಶೆಟ್ಟಿ, ಮಹೇಶ್ವರಪ್ಪ, ಜಿ. ಎಸ್. ಲಕ್ಷ್ಮಣನಾಯ್ಕ, ವಿ. ರಾಮ ಭಟ್, ವಿ. ಲಕ್ಷ್ಮಣ ಬಾಪಟ್, ಕೆ. ನಾಗರಾಜ್, ಎಂ. ಆರ್. ಚಿನ್ನಪ್ಪ, ನಾಗಪ್ಪ ನಾಯ್ಕ ಹಾಗೂ ಗಣೇಶಶಾಸ್ತ್ರಿ, ಇವರುಗಳ ಸೇವೆ ಈ ಸಂದರ್ಭದಲ್ಲಿ ಸ್ಮರಣೆಗೆ ಯೋಗ್ಯ.

ತನ್ನ ಶೈಕ್ಷಣಿಕ ಪ್ರಗತಿಯ ಜೊತೆಗೆ ಪಠ್ಯೇತರ ಚಟುವಟಿಕೆಗಳಲ್ಲೂ ತಾಲ್ಲೂಕಿನಲ್ಲಿ ಒಂದು ಪ್ರಮುಖ ಸ್ಥಾನ ಪಡೆದು,

(3ನೇ ಪುಟಕ್ಕೆ)

## ಮಕ್ಕಳಿಗೆ ಪುಸ್ತಕಗಳ 'ಹೊರೆ' ತಪ್ಪಿಸಲು ಕೋರಿ ಹೈಕೋರ್ಟಿನಲ್ಲಿ ರಿಟ್

ಮಕ್ಕಳಿಗೆ ಪುಸ್ತಕಗಳು ಹೊರೆಯಾಗದಂಥ ಪಠ್ಯ ಕ್ರಮ ರೂಪಿಸುವಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಆದೇಶ ನೀಡಬೇಕು ಎಂದು ಕೋರಿ ಕರ್ನಾಟಕ ಹೈಕೋರ್ಟಿನಲ್ಲಿ ಸಾರ್ವಜನಿಕ ಹಿತಾಸಕ್ತಿಯ ರಿಟ್ ಅರ್ಜಿಯೊಂದನ್ನು ಸಲ್ಲಿಸಲಾಗಿದೆ.

ರಿಟ್ ಅರ್ಜಿಯನ್ನು ವಿಚಾರಣೆಗೆ ಅಂಗೀಕರಿಸುವ ಬಗ್ಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ನೋಟೀಸ್ ಜಾರಿ ಮಾಡುವಂತೆ ನ್ಯಾಯಮೂರ್ತಿ ಎಂ.ಪಿ ಚಂದ್ರಕಾಂತರಾಜ ಅರಸು ಡಿ. 14ರಂದು ಆದೇಶಿಸಿದರು

ಈಗಿನ ಪಠ್ಯ ಕ್ರಮದಿಂದಾಗಿ ಮಕ್ಕಳು ಏಳೆಂಟು ಕೆ.ಜಿ.ಯಷ್ಟು ಪುಸ್ತಕ ಹಾಗೂ ಮತ್ತಿತರ ವಸ್ತುಗಳನ್ನು ಹೊರಬೇಕಾಗಿದ್ದು ಮಕ್ಕಳ ವಯಸ್ಸಿಗೆ ಭಾರಿ ತೂಕ ಆಗುತ್ತಿದೆ. ಈ ರೀತಿ ಮಕ್ಕಳು ಹೊರೆ ಹೊತ್ತರೆ ಬೆನ್ನು ನೋವಿಗೆ ಅಥವಾ ನರಗಳ ದೌರ್ಬಲ್ಯಕ್ಕೆ ಒಳಗಾಗುವ ಸಾಧ್ಯತೆ ಇದೆ ಎಂದು ಮೂಳೆ ತಜ್ಞರೊಬ್ಬರು ಅಭಿಪ್ರಾಯಪಟ್ಟಿರುವುದನ್ನು ಅರ್ಜಿದಾರರು ಉಲ್ಲೇಖಿಸಿ ಮಕ್ಕಳ ಮೇಲೆ ಹೆಚ್ಚು ಹೊರೆ ಬೀಳದಂತೆ ಪಠ್ಯಪುಸ್ತಕಗಳನ್ನು ನಿಗದಿಗೊಳಿಸುವಂತೆ ಆದೇಶಿಸಬೇಕು ಎಂದು ವರದಾಚಾರ್ ಸ್ಮಾರಕ ಸಂಘದ ಅಧ್ಯಕ್ಷ ಪಿ.ಎಸ್. ರಂಗನಾಥಾಚಾರ್ ಕೋರಿದ್ದಾರೆ.

# ಬೇಂದ್ರೆ ಕಾವ್ಯ ದೃಷ್ಟಿ: ಡಾ|| ವಾಮನ ಬೇಂದ್ರೆ ಭಾಷಣ

"ಕವನವನ್ನು ಅರ್ಥೈಸಿಕೊಳ್ಳುವ ಮಟ್ಟಕ್ಕೆ ಓದುಗನು ಬೆಳೆಯಬೇಕೇ ವಿನಃ ಕವಿಯು ತನ್ನ (ಓದುಗನ) ಮಟ್ಟಕ್ಕೆ ಸರಿಯಾಗಿ ಬರೆಯಬೇಕೆಂಬ ಭಾವನೆ ಸಲ್ಲ" ಎಂದು ಡಾ|| ವಾಮನಬೇಂದ್ರೆಯವರು, ಶೃಂಗೇರಿ ಕಾಲೇಜಿನ 'ರಜತ ಮಹೋತ್ಸವ'ದ ಪ್ರಯುಕ್ತ ಡಿ. 6 ರಂದು ಏರ್ಪಡಿಸಿದ್ದ ಉಪನ್ಯಾಸ ಮಾಲೆಯಲ್ಲಿ ವರಕವಿ ದ. ರಾ. ಬೇಂದ್ರೆಯವರನ್ನು ಕುರಿತು ಮಾತನಾಡುತ್ತ ತಿಳಿಸಿದರು.

ಬೇಂದ್ರೆಯವರು ಕವನ ರಚನೆಯಲ್ಲಿ ಮಾಂತ್ರಿಕಸಿದ್ಧಿಯನ್ನು ಪಡೆದಿದ್ದರಿಂದ ವಾಮನ ಬೇಂದ್ರೆಯವರು ಬೇಂದ್ರೆ ಕವನಗಳ ಬಗ್ಗೆ ವಿಮರ್ಶೆಯ ನೆಲೆಯಲ್ಲಿ ಮಾತನಾಡದಿದ್ದರೂ, ತುಂಬಾ ಭಾವನಾತ್ಮಕವಾಗಿ, ಅವರ ಕವನ ಶೈಲಿ, ಅದರ ಒಳಹೊರಗನ್ನು ಕೇಳುಗರಿಗೆ ಮನನ ಮಾಡಿಸಿದರು. ನಂತರ ಬೇಂದ್ರೆ ಕುರಿತ ಸಾಕ್ಷ್ಯಚಿತ್ರವನ್ನು ಪ್ರದರ್ಶಿಸಲಾಯಿತು.

ಪ್ರಿನ್ಸಿಪಾಲ್ ಎಂ. ಕೃಷ್ಣಪ್ಪಯ್ಯನವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಜಿ. ಎಂ ಭಟ್ ಅವರೂ ಮಾತನಾಡಿದರು. ಹಯವದನ ಉಪಾಧ್ಯ ಸ್ವಾಗತಿಸಿ, ಎ. ಕೆ. ಭಟ್ ವಂದಿಸಿದರು.

### ಅಸಡ್ಡೆ

ಈ ವರ್ಷದ ಪ್ರಾರಂಭದಿಂದ ನಡೆಸಬೇಕಾಗಿದ್ದ ಈ ಕಾರ್ಯಕ್ರಮಗಳನ್ನು ಮಧ್ಯಾವಧಿ ರಜೆಯ ನಂತರ ಪ್ರಾರಂಭಿಸುತ್ತಿರುವುದು ಕಾಲೇಜಿನ ರಜತೋತ್ಸವ ಸಮಿತಿಯವರ ಅಸಡ್ಡೆಯನ್ನು ತೋರಿಸುತ್ತದೆಯೇ? ಜೊತೆಗೆ, ಇನ್ನುಳಿದ 2-3 ತಿಂಗಳಲ್ಲಿ ಎಷ್ಟು ವಿಚಾರ ಸಂಕಿರಣಗಳನ್ನು ಏರ್ಪಡಿಸಬಹುದು? ಅಲ್ಲದೆ, ಈ ಕಾರ್ಯಕ್ರಮಗಳನ್ನು ನಡೆಸುವುದರಿಂದ ವಿದ್ಯಾರ್ಥಿಗಳಿಗೆ ಪಾಠಗಳು ಮುಗಿಯಬಹುದೆ?

ಆದ್ದರಿಂದ ಸಾಧ್ಯವಾದಷ್ಟು ಕ್ಲಪ್ತ ಅವಧಿಯಲ್ಲಿ ಒಳ್ಳೆಯ ಕಾರ್ಯಕ್ರಮಗಳನ್ನು ಏರ್ಪಡಿಸಿ ವಿದ್ಯಾರ್ಥಿಗಳಿಗೆ, ಸಾಹಿತ್ಯಾಸಕ್ತರಿಗೆ ಒಳ್ಳೆಯ ಅವಕಾಶವನ್ನು ಕಲ್ಪಿಸುತ್ತಾರೆಂದು ನಂಬೋಣವೆ?

ಕೊನೆಯದಾಗಿ, ಇಂಥ ಒಂದು ಒಳ್ಳೆಯ ಕಾರ್ಯಕ್ರಮಕ್ಕೆ ಭಾಗವಹಿಸುತ್ತಿರುವ ಕಡಿಮೆ ವಿದ್ಯಾರ್ಥಿಗಳನ್ನು ನೋಡಿದಾಗ ನಮ್ಮ ಯುವ ಪೀಳಿಗೆ ಯಾವ ಸ್ಥಿತಿಗೆ ತಲುಪಿದೆ ಎಂದು ಅರಿವಾಗುತ್ತದೆ

—ವೈ.ಗ. ಜಗದೀಶ್, ಶೃಂಗೇರಿ.

## ಕರ್ನಾಟಕ ಸರ್ಕಾರ.

ಸಂಖ್ಯೆ: ಎಹೆಚ ಎಫ್ಎಫ್: 75 : ಎಫ್‌ಡಬ್ಲ್ಯುಎಲ್ : 89.

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ : 2-11-1989.

## ಅಧಿಸೂಚನೆ

**ವಿಷಯ : ವನ್ಯಪ್ರಾಣಿ ಸಂರಕ್ಷಣಾ ಕಾಯಿದೆ 1972 ರ ರೀತ್ಯಾ ವನ್ಯಪ್ರಾಣಿ ವಸ್ತುಗಳ ವಿಜಯ ಸ್ಮಾರಕಗಳ (ಟ್ರೋಫಿಗಳ) ಬಂಧಿತ ಪ್ರಾಣಿಗಳ ಬಗ್ಗೆ ಘೋಷಣೆ.**

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಅಧಿಸೂಚನೆ ಸಂಖ್ಯೆ: ಎಫ್‌ಡಿ:100:ಎಫ್‌ಡಬ್ಲ್ಯುಎಲ್ : 72. ದಿನಾಂಕ 14-9-1972ರ ರೀತ್ಯಾ ವನ್ಯಪ್ರಾಣಿ ಸಂರಕ್ಷಣಾ ಕಾಯಿದೆ 1972ನ್ನು ವನ್ಯಪ್ರಾಣಿ ಸಂರಕ್ಷಣೆ ನಿಯಮ ಕರ್ನಾಟಕ-1973ರೊಂದಿಗೆ ಕರ್ನಾಟಕ ರಾಜ್ಯದಲ್ಲಿಯೂ ಜಾರಿಗೊಳಿಸಲಾಯಿತು. ಸದರಿ ಕಾಯಿದೆ ಪ್ರಾಕಾರ ಪ್ರಕರಣ ಸಂಖ್ಯೆ : 39ರ ರೀತ್ಯ ಯಾವುದೇ ವನ್ಯಪ್ರಾಣಿಗಳು, ವನ್ಯಪ್ರಾಣಿ ವಸ್ತುಗಳು, ಅವುಗಳಿಂದ ತಯಾರಿಸಲ್ಪಟ್ಟ ವಿಜಯ ಸ್ಮಾರಕಗಳು ರಾಜ್ಯ ಸರ್ಕಾರದ ಆಸ್ತಿಯಾಗಿರುತ್ತವೆ. ಮತ್ತು ಅಂತಹ ಪ್ರಾಣಿಗಳು, ವನ್ಯಪ್ರಾಣಿ ವಸ್ತುಗಳು ಕೇಂದ್ರ ಸರ್ಕಾರ ಘೋಷಿಸಿದ ರಾಷ್ಟ್ರೀಯ ವನ್ಯ ಮೃಗಾಲಯಗಳಲ್ಲಿ ಪಡೆಯಲಾದವುಗಳಾದಲ್ಲಿ ಕೇಂದ್ರ ಸರ್ಕಾರದ ಆಸ್ತಿಯಾಗಿರುತ್ತವೆ. ಸದರಿ ವನ್ಯಪ್ರಾಣಿಗಳು, ವನ್ಯಪ್ರಾಣಿ ವಸ್ತುಗಳನ್ನು ಹೊಂದಿರುವವರು ಸದರಿ ಕಾಯಿದೆಯ 40 ನೇ ವಿಧಿಯ ಅನುಬಂಧ-1 ಮತ್ತು 2 ರನ್ವಯ ಕಾಯಿದೆ ಜಾರಿಗೆ ಬಂದ 30 ದಿನಗಳೊಳಗೆ ಮುಖ್ಯ ವನ್ಯಪ್ರಾಣಿ ಪರಿಪಾಲಕರೊಂದಿಗೆ ಘೋಷಿಸಿಕೊಳ್ಳಬೇಕಾಗಿದ್ದು ಮತ್ತು ಪ್ರಕರಣ 42ರ ರೀತ್ಯ ಒಡೆತನ ಪ್ರಮಾಣ ಪತ್ರವನ್ನು ಪಡೆದುಕೊಳ್ಳಬೇಕಾಗಿರುತ್ತದೆ.

ಸದರಿ ಕಾಯಿದೆ ಜಾರಿಗೆ ಬಂದ ಇಷ್ಟು ವರ್ಷಗಳಾದರೂ ಕೂಡ ವನ್ಯಪ್ರಾಣಿಗಳನ್ನು, ವಿಜಯ ಸ್ಮಾರಕಗಳನ್ನು ಮತ್ತು ವನ್ಯಪ್ರಾಣಿ ವಸ್ತುಗಳನ್ನು ಹೊಂದಿರುವವರು ಇಲ್ಲಿನ ತನಕ ಘೋಷಿಸಿಕೊಳ್ಳದೇ ಇರುವುದು ಗಮನಕ್ಕೆ ಬಂದಿದೆ.

ಆದುದರಿಂದ ಬಂಧಿತ ವನ್ಯಪ್ರಾಣಿಗಳು, ವಿಜಯ ಸ್ಮಾರಕಗಳು ಮತ್ತು ವನ್ಯಪ್ರಾಣಿ ವಸ್ತುಗಳು ಮುಂತಾದವುಗಳನ್ನು ಹೊಂದಿರುವ ಸಾರ್ವಜನಿಕರು ಮುಖ್ಯ ವನ್ಯಪ್ರಾಣಿ ಪರಿಪಾಲಕರು, ಕರ್ನಾಟಕ ರಾಜ್ಯ, ಅರಣ್ಯ ಭವನ, ಬೆಂಗಳೂರು ಇವರೊಂದಿಗೆ ಘೋಷಿಸಿಕೊಳ್ಳಲು ಕಡೆಯ ಅವಕಾಶವನ್ನು ನೀಡಲಾಗಿದ್ದು, ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಗೆಜೆಟ್ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 90 ದಿನದೊಳಗೆ ಘೋಷಿಸಿಕೊಳ್ಳತಕ್ಕದ್ದು. ಆಮೇಲೆ ಬರುವ ಘೋಷಣೆಗಳನ್ನು ಪರಿಗಣಿಸಲಾಗುವುದಿಲ್ಲ ವನ್ಯಪ್ರಾಣಿಗಳನ್ನು, ವಿಜಯ ಸ್ಮಾರಕಗಳನ್ನು ಮತ್ತು ವನ್ಯಪ್ರಾಣಿ ವಸ್ತುಗಳನ್ನು ಮೇಲೆ ತಿಳಿಸಿದ ಅವಧಿಯ ನಂತರ ಹೊಂದಿದ್ದಲ್ಲಿ ಅವುಗಳು ಸರ್ಕಾರದ ಸೊತ್ತು ಎಂದು ಪರಿಗಣಿಸಲಾಗುವುದು ಮತ್ತು ವನ್ಯಜೀವಿ ಸಂರಕ್ಷಣಾ ಕಾಯಿದೆ ಮತ್ತು ನಿಯಮಗಳ ಪ್ರಕಾರ ಕ್ರಮ ಕೈಗೊಳ್ಳಲಾಗುವುದು.

ಇನ್ನೂ ಹೆಚ್ಚಿನ ವಿವರಗಳಿಗಾಗಿ ಮುಖ್ಯ ವನ್ಯಪ್ರಾಣಿ ಪರಿಪಾಲಕರು, ಕರ್ನಾಟಕ ರಾಜ್ಯ, ಅರಣ್ಯ ಭವನ, 8ನೇ ತಿರುವು, ಮಲ್ಲೇಶ್ವರಂ ಬೆಂಗಳೂರು-3, ಇವರನ್ನು ಸಂಪರ್ಕಿಸಬಹುದು.

ದಿನಾಂಕ : 19-8-89ರ ಇದೇ ಕ್ರಮಾಂಕದ ಅಧಿಸೂಚನೆಯನ್ನು ರದ್ದುಗೊಳಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಹಿ
(ಜಿ. ಕೆ. ಕುರ್ಡೇಕರ್)
ಪಶು ಸಂಗೋಪನೆ, ಮೀನುಗಾರಿಕೆ ಮತ್ತು ಅರಣ್ಯ ಇಲಾಖೆ
"ನಕಲು ಪ್ರತಿ"
ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೊಪ್ಪ ವಿಭಾಗ,
ಕೊಪ್ಪ.

# ವಜ್ರ ಮಹೋತ್ಸವದ ಹೊಸ್ತಿಲಲ್ಲಿ ಕಿಗ್ಗ ಶಾಲೆ

(2ನೇ ಪುಟದಿಂದ)

ಜೀವಂತಿಕೆಯನ್ನುಳಿಸಿ ಕೊಂಡಿರುವ ಈ ಶಾಲೆ, ದೇಶಕ್ಕೆ ಸಾವಿರಾರು ಮಂದಿ ಉಪಯುಕ್ತ ನಾಗರಿಕರನ್ನು ನೀಡಿದೆ. ವೈದ್ಯಕೀಯ ರಂಗದಲ್ಲಿ ಡಾ|| ಹುಲ್ಸೆ ಮಂಜಪ್ಪಗೌಡ, ಡಾ|| ಎಸ್. ಜಿ. ಸತ್ಯಮೂರ್ತಿ, ಕೈಗಾರಿಕಾರಂಗದಲ್ಲಿ ಮುಂಬೈಯ ಜಹೀರ್ ಅಹಮದ್, ಬೆಂಗಳೂರಿನ ಎಂ. ದೇವಪ್ಪ, ವಿದ್ಯಾ ಕ್ಷೇತ್ರದಲ್ಲಿ ಎಸ್.ಜಿ. ರಾಜಶೇಖರ್, ಕೆ. ಎಂ. ಸುಬ್ರಮಣ್ಯ, ಶೃಂಗೇಶ್ವರ ಜೋಯಿಸ್, ವೆಂಕಟೇಶ ಪ್ರಸನ್ನ, ಬಿ. ಕೆ. ಲಕ್ಷ್ಮೀನಾರಾಯಣ, ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಜಿ. ವಿ. ನಟರಾಜ್, ರಾಜಕೀಯ ರಂಗದಲ್ಲಿ ಎಚ್. ವಿ. ಸುಬ್ಬಣ್ಣಗೌಡ, ಕೆ. ಎಂ. ಮಂಜುನಾಥ್, ಎಸ್. ಜಿ ನಾಗರಾಜ್, ಮುಂತಾದವರಲ್ಲದೆ ಹತ್ತಾರು ಬ್ಯಾಂಕ್ ಅಧಿಕಾರಿಗಳನ್ನೂ, ಸಾವಿರಾರು ಮಂದಿ ಪ್ರಗತಿಪರ, ಪ್ರಜ್ಞಾವಂತ ರೈತರನ್ನೂ ಈ ಶಾಲೆ ನೀಡಿದೆ.

ಹೀಗೆ ಹಲವು ಸಾಧನೆಗಳ ಗರಿಗಳನ್ನು ತನ್ನ 'ವಜ್ರ ಕಿರೀಟ'ಕ್ಕೆ ಅಳವಡಿಸಿಕೊಂಡಿರುವ ಈ ಶಾಲೆಯ 75ನೇ ಹುಟ್ಟು ಹಬ್ಬ ಎಲ್ಲರ ಸ್ನೇಹ, ಸಹಕಾರಗಳನ್ನೂ ಬಯಸುತ್ತದೆ.

## ಪ್ರಕಟಣೆ

1986ನೇ ಸಾಲಿನ ಎರಡನೆ ಕಂತಿನ ಸಹಾಯ ಧನ ಮತ್ತು 1988ನೇ ಸಾಲಿನ ಮೊದಲನೆ ಕಂತಿನ ಸಹಾಯ ಧನ ಮಂಜೂರಾತಿಗೆ ಅರ್ಜಿಯನ್ನು ಕರೆಯಲಾಗಿದೆ

ಈ ಮೇಲ್ಕಂಡ ಸಾಲಿನಲ್ಲಿ ಕಾಫಿ ಹಾಕಿದ ಬೆಳೆಗಾರರು ಅರ್ಜಿ ಮತ್ತು ಮಾಹಿತಿಯನ್ನು ಹಿರಿಯ ಸಂಪರ್ಕಾಧಿಕಾರಿಗಳು, ಕಾಫಿ ಮಂಡಳಿ ಕೊಪ್ಪ/ಕಿರಿಯ ಸಂಪರ್ಕಾಧಿಕಾರಿಗಳು, ಕಾಫಿ ಮಂಡಳಿ, ಬಾಳೆಹೊನ್ನೂರು/ನ.ರಾ.ಪುರ ಅಥವಾ ಸಂಪರ್ಕ ಸಹಾಯಕ, ಜಯಪುರ ಇವರನ್ನು ಕಛೇರಿ ವೇಳೆಯಲ್ಲಿ ಸಂಧಿಸಿ ಪಡೆಯಬಹುದು ದಾಖಲಾತಿಗಳೊಂದಿಗೆ ತುಂಬಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ. 31-3-90. ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹಿರಿಯ ಸಂಪರ್ಕಾಧಿಕಾರಿಗಳು.
ಕಾಫಿ ಮಂಡಳಿ, ಕೊಪ್ಪ

ಶ್ರೀ
... ಪುಟ್ಟೇ
... ಭೇಟಿಯಾಗಲು ಮತ್ತು
ತಾವು ಊರಲ್ಲಿ ಇಲ್ಲದಾಗ ಜನರ ಅರ್ಜಿ–ಅಹವಾಲುಗಳನ್ನು ಪಡೆಯಲು ಅನುಕೂಲವಾಗುವಂತೆ ಮೂಡಿಗೆರೆಯ ಕೆ. ಎಂ. ರಸ್ತೆಯಲ್ಲಿ ತಮ್ಮ ಕಛೇರಿಯೊಂದನ್ನು ತೆರೆದಿದ್ದಾರೆ.

ಕಛೇರಿಯಲ್ಲಿ ಒಬ್ಬ ಸಹಾಯಕನನ್ನು ನೇಮಿಸಿದ್ದು, ಫೋನ್: ನಂಬರ್ ಮೂಡಿಗೆರೆ–372.

## 'ಜೈವಿಕ ವಿದ್ಯುತ್‌ಕೋಶ'ಕ್ಕೆ 3ನೇ ಬಹುಮಾನ

ಬಸರಿಕಟ್ಟೆ: ಇಲ್ಲಿನ ಶ್ರೀ ಸದ್ಗುರು ಪ್ರೌಢಶಾಲೆಯ "ಜೈವಿಕ ವಿದ್ಯುತ್ ಕೋಶ" ಪ್ರದರ್ಶಿಕೆಯು, ಬಾಳೆಹೊನ್ನೂರಿನಲ್ಲಿ ಈ ತಿಂಗಳ 7 ಮತ್ತು 8ರಂದು ಜರುಗಿದ ಜಿಲ್ಲಾ ಮಟ್ಟದ ಅಂತರ ಪ್ರೌಢಶಾಲಾ ವಿಜ್ಞಾನ ವಸ್ತು ಪ್ರದರ್ಶನದಲ್ಲಿ ತೃತೀಯ ಸ್ಥಾನ ಪಡೆದು ರಾಜ್ಯ ಮಟ್ಟಕ್ಕೆ ಆಯ್ಕೆಯಾಯಿತು.

ಸಗಣಿ, ಪಪ್ಪಾಯಿ, ಎಕ್ಕೆ ಮುಂತಾದ ಜೈವಿಕ ವಸ್ತುಗಳಿಂದ ವಿದ್ಯುತ್ ತಯಾರಿಸಿ, ಎಲೆಕ್ಟ್ರಾನಿಕ್ ಗಡಿಯಾರ, ಕ್ಯಾಲ್ಕ್ಯುಲೇಟರ್‌ಗಳಿಗೆ ವಿದ್ಯುತ್ ಒದಗಿಸಬಹುದೆಂದು ಶ್ರೀ ಸದ್ಗುರು ಪ್ರೌಢಶಾಲೆಯ ವಿದ್ಯಾರ್ಥಿಗಳು ತೋರಿಸಿದರು.

ಇದಕ್ಕೆ ತಗಲುವ ವೆಚ್ಚ ತೀರಾ ಕಡಿಮೆ ಅಂದರೆ ಇಪ್ಪತ್ತು ರೂ. ಮಾತ್ರವಾಗಿದ್ದು, ಪ್ರದರ್ಶನದಲ್ಲಿ ಇದು ಬಹು ಜನರ ಗಮನ ಸೆಳೆಯಿತು.

# ಸಂಕ್ಷಿಪ್ತ ಸುದ್ದಿಗಳು

### ಸಂತಾಪ ಸೂಚನೆ

ಕೊಪ್ಪ: ಇಲ್ಲಿಗೆ ಸಮೀಪದ ಗುಣವಂತೆ ಬಡಾವಣೆಯ ಹಿ.ಪ್ರಾ. ಶಾಲೆಯ ಅಧ್ಯಾಪಕ ವೃಂದ, ಮಹಿಳಾ ಸಮಾಜ ಮತ್ತು ಅಂಗನವಾಡಿ ಕಾರ್ಯಕರ್ತೆಯರು ಹಾಗೂ ಸಾರ್ವಜನಿಕರು ನ. 28ರಂದು ಸಭೆ ಸೇರಿ, ಸಣ್ಣಕೆರೆ ಶ್ರೀನಿವಾಸ್‌ರವರ ನಿಧನಕ್ಕೆ ಸಂತಾಪ ಸೂಚಿಸಿ ಶ್ರದ್ಧಾಂಜಲಿ ಸಲ್ಲಿಸಿದರು.

### ಕ್ರಿಕೆಟ್ ಜಯ

ನಾರ್ವೆ: ಇಲ್ಲಿನ ಯಂಗ್ ಸ್ಟಾರ್ ಕ್ರಿಕೆಟ್ 'ಬಿ' ತಂಡದ ಆಶ್ರಯದಲ್ಲಿ ನಡೆದ ಪಂದ್ಯದಲ್ಲಿ ಜಯಪುರ ತಂಡದವರು ತೆಂಗಿನಮನೆ ತಂಡವನ್ನು 6 ವಿಕೆಟ್‌ಗಳಿಂದ ಸೋಲಿಸಿ 3 ನೇ ಬಾಂಗೆ ಛಾಂಪಿಯನ್ ಟ್ರೋಫಿ ಗೆದ್ದರು. 33 ರನ್ ಗಳಿಸಿದ ರಫೀಕ್ 'ಪಂದ್ಯದ ವ್ಯಕ್ತಿ'ಯಾದರು.

### ಆಹ್ವಾನ ಕ್ರಿಕೆಟ್ ಟೂರ್ನಿ

ಹರಿಹರಪುರ: ಇಲ್ಲಿನ ಸ್ನೇಹ ಸಂಗಮ ಕ್ಲಬ್ ಆಶ್ರಯದಲ್ಲಿ ದಿ|| ನಿಲುವಾಗಿಲು ಪುಟ್ಟೇನಾಯ್ಕ ಸ್ಮಾರಕ 3ನೇ ವರ್ಷದ ಆಹ್ವಾನ ಕ್ರಿಕೆಟ್ ಟೂರ್ನಿ 23-12-89 ರಿಂದ 1 ವಾರ ನಡೆಯಲಿದೆ

### ಹಲ್ಲೆಗೆ ಖಂಡನೆ

ಕೊಪ್ಪ: ಚಿಕ್ಕಗ್ರಹಾರ ವಲಯ ಅರಣ್ಯಾಧಿಕಾರಿ ಲಕ್ಷ್ಮೀನಾರಾಯಣ್, ಫಾರೆಸ್ಟರ್ ಕೃಷ್ಣಮೂರ್ತಿ ಮತ್ತು ಗಾರ್ಡ್ ಬಸವರಾಜ್ ಇವರ ಮೇಲೆ ಗಂಧಚೋರರು ನಡೆಸಿದ ಮಾರಕ ಹಲ್ಲೆಯನ್ನು ಕೊಪ್ಪ ತಾ|| ಸರ್ಕಾರಿ ನೌಕರರ ಸಂಘ ಉಗ್ರವಾಗಿ ಖಂಡಿಸಿದೆ

ಸಂಬಂಧಪಟ್ಟವರು ಈ ಅಪರಾಧಿಗಳ ಮೇಲೆ ಶೀಘ್ರ ಕ್ರಮ ಜರುಗಿಸುವುದಲ್ಲದೆ ಅರಣ್ಯ ರಕ್ಷಕ ಸಿಬ್ಬಂದಿಗೆ ಇಲಾಖೆ ಅಗತ್ಯ ರಕ್ಷಣೆ ಒದಗಿಸಬೇಕೆಂದು ಸಂಘ ಒತ್ತಾಯಿಸಿದೆ.

### ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 13-12-1989
ಸರಕು : 3000-3706
ಬೆಟ್ಟೆ : 2200-2860
ಗೊರಬಲು : 1000-1810
ಸಾಗರ : 13.12 1989
ಇಡಿ : 2496-2689
ಚಾಲಿ : 2761-2941
ಆಪಿ : 3399-3630
ಸಿಪ್ಪೆಗೋಟು : 1389-1539

**ಏಲಕ್ಕಿ**

ಕೊಪ್ಪ 16-12-1989
ರಾಶಿ 240-260
ಅರಿಸಿದ್ದು 300-320
ಜರಡಿ 260-280





ಮಧ್ಯಾಂತರ ಮಂಡಲ ಪಂಚಾಯಿತಿ ಕಾರ್ಯಾಲಯ, ಕೊಪ್ಪ

**ನೋಟಿಫಿಕೇಶನ್ ನಂ. ಎಸ್‌ಸಿ (2) ಪಿಆರ್ (ನಿವೇಶನ ಹರಾಜು) 26/89-90 ದಿನಾಂಕ: 11-12-1989.**

# ನಿವೇಶನ ಹರಾಜು ಪ್ರಕಟಣೆ

ಕೊಪ್ಪ ಮಧ್ಯಾಂತರ ಮಂಡಲ ಪಂಚಾಯಿತಿಗೆ ಸೇರಿದ ವಿದ್ಯಾನಗರದ ಸರ್ವೆ ನಂ. 77ರ ಲೇಔಟ್ ಪ್ರದೇಶದಲ್ಲಿರುವ ಈ ಕೆಳಕಂಡ ಖಾಲಿ ನಿವೇಶನಗಳನ್ನು ದಿನಾಂಕ 7-1-1990ನೇ ಭಾನುವಾರ ಬೆಳಗ್ಗೆ 11-00 ಗಂಟೆಗೆ ಸರಿಯಾಗಿ ಸ್ಥಳದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಭಾಗವಹಿಸಲು ಇಚ್ಛಿಸುವವರು, 2000-00 ರೂ. ಡಿಪಾಜಿಟ್ ಮಾಡಿ ಬಿಡ್ಡಿನಲ್ಲಿ ಭಾಗವಹಿಸಬಹುದಾಗಿರುತ್ತೆ. ಹೆಚ್ಚಿನ ವಿವರಗಳಿಗೆ ಕೆಲಸದ ವೇಳೆಯಲ್ಲಿ ಈ ಕಾರ್ಯಾಲಯದಲ್ಲಿ ವಿಚಾರಿಸಬಹುದಾಗಿರುತ್ತೆ.

## ಹರಾಜಿಗೆ ಒಳಪಡುವ ನಿವೇಶನಗಳ ವಿವರ

| ಬ್ಲಾಕ್ ನಂ. | ನಿವೇಶನದ ನಂಬರು | ವಿಸ್ತೀರ್ಣ | ಹರಾಜು ಮಾಡುವ ನಿವೇಶನಗಳ ಸಂಖ್ಯೆ |
|---|---|---|---|
| 1. | 1, 2, 5, 6, 7 ಮತ್ತು 8 | $40 \times 60$ ಅಡಿಗಳು | |
| | 3 | $\frac{16+14}{2} \times 60$ ಅಡಿಗಳು | |
| | 4 | $\frac{9+14}{2} \times 60$ ಅಡಿಗಳು | |
| 2. | 1, 2, 3, 6, 7 ಮತ್ತು 8 | $40 \times 60$ ಅಡಿಗಳು | |
| | 4 | $\frac{23+19}{2} \times 60$ ಅಡಿಗಳು | |
| | 5 | $\frac{24+23}{2} \times 60$ ಅಡಿಗಳು | |
| | 13 | $\frac{19+21}{2} \times 40$ ಅಡಿಗಳು | |
| | 14 | $\frac{18+19}{2} \times 40$ ಅಡಿಗಳು | |
| | 23 | $\frac{15+19}{2} \times 40$ ಅಡಿಗಳು | |
| | 24 | $\frac{13+18}{2} \times 40$ ಅಡಿಗಳು | |
| 3. | 5 ಮತ್ತು 6 | $40 \times 60$ ಅಡಿಗಳು | |
| | 12 | $\frac{18+30}{2} \times 47$ ಅಡಿಗಳು | |
| | 13 | $\frac{28+35}{2} \times 42$ ಅಡಿಗಳು | |
| | 30 | $\frac{35+48}{2} \times 42$ ಅಡಿಗಳು | |
| | | ಜುಮ್ಲಾ | 25 ನಿವೇಶನಗಳು |

(ಸಹಿ)
**ಕೆ.ವಿ. ಮಂಜುನಾಥ ಶೆಟ್ಟಿ,**
ಪ್ರಧಾನರು,
ಮಧ್ಯಾಂತರ ಮಂಡಲ ಪಂಚಾಯಿತಿ,
ಕೊಪ್ಪ.

(ಸಹಿ)
**ಆರ್. ಗಣೇಶ್,**
ಕಾರ್ಯದರ್ಶಿ,
ಮಧ್ಯಾಂತರ ಮಂಡಲ ಪಂಚಾಯಿತಿ,
ಕೊಪ್ಪ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚು ಕೂಟ, ಕೊಪ್ಪ.